





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ನಿಮ್ಮ ಪ್ರಭು ಆನೆಯವರೊಂದಿಗೆ ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ?

اَلَمْ تَرَ كَيْفَ فَعَلَ رَبُّكَ بِاَصْحٰبِ الْفِيْلِ ۝١

2. ಅವನು ಅವರ ಯೋಜನೆಯನ್ನು ನಿರರ್ಥಕಗೊಳಿಸಿ ಬಿಡಲಿಲ್ಲವೇ?

اَلَمْ يَجْعَلْ كَيْدَهُمْ فِيْ تَضْلِيْلٍ ۝٢

3. ಮತ್ತು ಅವನು ಅವರ ಮೇಲೆ ಪಕ್ಷಿಗಳ ಗುಂಪುಗಳನ್ನೇ ಕಳುಹಿಸಿಬಿಟ್ಟನು-

وَّاَرْسَلَ عَلَيْهِمْ طَيْرًا اَبَابِيْلَ ۝٣

4. ಅವು ಅವರ ಮೇಲೆ ಸುಟ್ಟ ಮಣ್ಣಿನ ಕಲ್ಲುಗಳನ್ನು ಎಸೆಯುತ್ತಿದ್ದುವು-

تَرْمِيْهِمْ بِحِجَارَةٍ مِّنْ سِجِّيْلٍ ۝٤

5. ತರುವಾಯ ಅವನು ಅವರನ್ನು (ಪ್ರಾಣಿಗಳು) ತಿಂದು ಹಾಕಿದ ಹೊಟ್ಟಿನಂತೆ ಮಾಡಿಬಿಟ್ಟನು.[1]

فَجَعَلَهُمْ كَعَصْفٍ مَّاْكُوْلٍ ۝٥

---

1. ಇದು ಪ್ರವಾದಿವರ್ಯರ(ಸ) ಜನನಕ್ಕೆ ಐವತ್ತು ದಿನ ಮೊದಲು ಸಂಭವಿಸಿದ್ದ ಘಟನೆಯ ಪ್ರಸ್ತಾಪ. ಯಮನ್‌ನ, ಅಬಿಸೀನಿಯಾ ಮೂಲದ ಕ್ರೈಸ್ತ ರಾಜನಾದ ಅಬ್ರಹಾ, ಕಅಬಾ ಭವನವನ್ನು ಕೆಡವಿ ಹಾಕುವ ಉದ್ದೇಶದಿಂದ ಅರ್ವತ್ತು ಸಾವಿರ ಸೈನಿಕರೊಂದಿಗೆ ಮಕ್ಕಾದ ಮೇಲೆ ದಂಡೆತ್ತಿ ಬಂದಿದ್ದನು. ಸೇನೆಯಲ್ಲಿ ಅನೇಕ ಆನೆಗಳೂ ಇದ್ದವು. ಅವನು ಮುಝ್ದಲಿಫಾ ಮತ್ತು ಮಿನಾದ ನಡುವೆ ತಲಪಿದಾಗ ಇದ್ದಕ್ಕಿದ್ದಂತೆ ಸಮುದ್ರದ ಕಡೆಯಿಂದ ಪಕ್ಷಿಗಳ ಅನೇಕ ತಂಡಗಳು ತಮ್ಮ ಕೊಕ್ಕು ಮತ್ತು ಕಾಲುಗಳಲ್ಲಿ ಹರಳುಕಲ್ಲುಗಳನ್ನು ಹಿಡಿದುಕೊಂಡು ಬಂದವು. ಅವು ಸೇನೆಯ ಮೇಲೆ ಕಲ್ಲಿನ ಮಳೆಗರೆದವು. ಹರಳುಗಳು ಯಾರ ಮೇಲೆ ಬೀಳುತ್ತಿತ್ತೋ ಅವರ ಮಾಂಸ ಕೊಳೆತು ಮೈಯಿಂದ ಕೆಳಗೆ ಜಾರುತ್ತಿತ್ತು. ಹೀಗೆ ಸಮಸ್ತ ಸೇನೆ ನಾಶವಾಯಿತು. ಅರೇಬಿಯಾದಲ್ಲಿ ಈ ಘಟನೆ ಅತ್ಯಂತ ಪ್ರಸಿದ್ಧವಾಯಿತು. ಈ ಸೂಕ್ತಗಳು ಅವತೀರ್ಣಗೊಳ್ಳುವಾಗ ಘಟನೆಯನ್ನು ಕಣ್ಣಾರೆ ಕಂಡಂತಹ ಸಾವಿರಾರು ವ್ಯಕ್ತಿಗಳು ಮಕ್ಕಾದಲ್ಲಿದ್ದರು. ಅಲ್ಲಾಹನ ಮಹಿಮೆಯಿಂದಾಗಿಯೇ ಆನೆಯವರ ನಾಶ ಸಂಭವಿಸಿತೆಂದು ಸಮಸ್ತ ಅರಬ್ ನಿವಾಸಿಗಳು ನಂಬಿದ್ದರು.